# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2522
2. ಸದಸ್ಯರ ಹೆಸರು : ಶ್ರೀ ಕೆ.ವಿ.ನಾರಾಯಣಸ್ವಾಮಿ
3. ಉತ್ತರಿಸಬೇಕಾದ ದಿನಾಂಕ : 23.03.2022
4. ಉತ್ತರಿಸುವವರು : ಮಾನ್ಯ ಕಾನೂನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಗ್ರಾಮೀಣ ಪ್ರದೇಶಗಳಲ್ಲಿ ಕೆರೆ, ಕುಂಟೆ ಮತ್ತು ಕಾಲುವೆಯಿಂದ ಎಷ್ಟು ಮೀಟರ್ ಅಂತರವನ್ನು "ಬಫರ್ ಜೋನ್" ಎಂದು ಗುರುತಿಸಿದೆ. | ಕರ್ನಾಟಕ ಕೆರೆ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ 2014 ಮತ್ತು ತದನಂತರದ ತಿದ್ದುಪಡಿಗಳನ್ವಯ ಪ್ರಕರಣ 12 ಉಪಪ್ರಕರಣ (3) ರನ್ವಯ ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ : ನಅಇ 126 ಸಮನ್ವಯ 2021 ದಿನಾಂಕ : 11.08.2011 ರನ್ವಯಕಂದಾಯ ದಾಖಲೆಗಳಂತೆ ಕೆರೆಯ ಹೊರಗಿನ ಸರಹದ್ದಿನಿಂದ 30.00 ಮೀಟರ್‌ವರೆಗೆ "ಬಫರ್ ಜೋನ್" ಎಂದು ನಿಗದಿಪಡಿಸಲಾಗಿದೆ.<br><br>ಕಾಲುವೆಗಳಿಗೆ ಸಂಬಂಧಿಸಿದಂತೆ, ಸರ್ಕಾರ ಆದೇಶ ಸಂಖ್ಯೆ : ನಅಇ 11 ಬಿಎಂಆರ್2017, ಬೆಂಗಳೂರು ದಿನಾಂಕ:20.07.2019 ರ ಆದೇಶದಲ್ಲಿ ಬಫರ್ ಜೋನ್ ನ್ನು ಈ ಕೆಳಗಿನಂತೆ ನಿಗದಿಪಡಿಸಲಾಗಿದೆ.<br><br>• Primary natural drainage channel (valleys) - a buffer of 30.00 mtr from the edge of primary natural drainage channel<br>• Secondary natural drainage channel (valleys) - a buffer of 15.00 mtr from the edge of secondary natural drainage channel<br>• Tertiary natural drainage channel (valleys) - a buffer of 10.00 mtr from the edge of Tertiary natural drainage channel |
| ಆ | ಗುರುತಿಸಿದ್ದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಬಫರ್ ಜೋನ್ ನಿಗಧಿ ಬಗ್ಗೆ ಸರ್ಕಾರದಿಂದ ಹೊರಡಿಸಲಾದ ಇತ್ತೀಚಿನ ಸುತ್ತೋಲೆ / ಆದೇಶಗಳಾವುವು: (ಪ್ರತಿಯನ್ನು ನೀಡುವುದು) | ಕರ್ನಾಟಕ ಕೆರೆ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ 2014 ಮತ್ತು ತದನಂತರದ ತಿದ್ದುಪಡಿಗಳ ಉದೃತ ಭಾಗವನ್ನು ಅನುಬಂಧ – 1 ರಲ್ಲಿ ಲಗತ್ತಿಸಿದೆ.<br><br>ರಾಜ ಕಾಲುವೆ ಬಫರ್ ಜೋನ್ ಕುರಿತು ದಿನಾಂಕ:20.07.2019 ರ ಆದೇಶದ ಪ್ರತಿಯನ್ನು ಅನುಬಂಧ – 2 ರಲ್ಲಿ ಲಗತ್ತಿಸಿದೆ ಮತ್ತು ದಿನಾಂಕ : 11.08.2021 ರಂದು ನಗರಾಭಿವೃದ್ಧಿ ಇಲಾಖೆವತಿಯಿಂದಸುತೋಲೆಯ ಪ್ರತಿಯನ್ನು ಅನುಬಂಧ – 3 ರಲ್ಲಿ ಲಗತ್ತಿಸಿದೆ. |
| ಇ | ಬಫರ್ ಜೋನ್ ವಲಯಗಳನ್ನು ರಕ್ಷಿಸುವ ಜವಾಬ್ದಾರಿಯನ್ನು ಗ್ರಾಮೀಣ ಭಾಗದಲ್ಲಿ ಯಾವ ಅಧಿಕಾರಿಗಳಿಗೆ | ಬಫರ್ ಜೋನ್ ವಲಯಗಳನ್ನು ರಕ್ಷಿಸುವ ಜವಾಬ್ದಾರಿಯು ಕೆರೆ ಉಸ್ತುವಾರಿ ಹೊಂದಿರುವ ಇಲಾಖೆಗಳಾದ್ದಾಗಿರುತ್ತದೆ.<br><br>ಈ ಹಿನ್ನಲೆಯಲ್ಲಿ ಕರ್ನಾಟಕ ಕೆರೆ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ 2014 ಮತ್ತು ತದನಂತರದ |

| | | |
|---|---|---|
| | ನೀಡಲಾಗಿದೆ; ಬಫರ್ ಜೋನ್ ರಕ್ಷಣೆಯಲ್ಲಿ / ತೆರವಿನಲ್ಲಿ ಸದರಿ ಅಧಿಕಾರಿಯ ಕರ್ತವ್ಯಗಳೇನು? | ತಿದ್ದುಪಡಿಗಳನ್ವಯ ಪ್ರಕರಣ 10 ರಲ್ಲಿ ಹೆಸರಿಸಲಾದ ಅಧಿಕಾರಿ ಮತ್ತು ಪ್ರಕರಣ11 ರಲ್ಲಿಪ್ರಾಧಿಕೃತ ಅಧಿಕಾರಿಗಳನ್ನು ನೇಮಿಸಲು ಅವಕಾಶವಿದ್ದು, ಅದರಂತೆ ಕ್ರಮವಹಿಸಲಾಗಿದೆ. |

**ಕಡತ ಸಂಖ್ಯೆ: ಎಂ ಐ ಡಿ/75/ಎಲ್‌ಸಿಕ್ಯೂ/2022**

**(ಜೆ.ಸಿ.ಮಾಧುಸ್ವಾಮಿ)**
ಕಾನೂನು, ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನೆ ಹಾಗೂ
ಸಣ್ಣ ನೀರಾವರಿ ಸಚಿವರು.

(ಇ) ಪ್ರಾಧಿಕಾರದ ನಿಧಿಯಿಂದ ಹಣವನ್ನು ತೆಗೆಯತಕ್ಕದ್ದು ಮತ್ತು ಬಟವಾಡೆ ಮಾಡತಕ್ಕದ್ದು;

(ಎಫ್) ಪ್ರಾಧಿಕಾರದ ಅಧಿಕಾರಿಗಳ ಮತ್ತು ನೌಕರರುಗಳ ಮೇಲೆ ನಿಯಂತ್ರಣವನ್ನು ಹೊಂದಿರತಕ್ಕದ್ದು;

(ಜಿ) ಪ್ರಾಧಿಕಾರದ ಎಲ್ಲಾ ಅನುಮತಿಗಳಿಗೆ, ಆದೇಶಗಳಿಗೆ, ತೀರ್ಮಾನಗಳಿಗೆ, ನೋಟೀಸುಗಳಿಗೆ ಮತ್ತು ಇತರ ದಸ್ತಾವೇಜುಗಳಿಗೆ ತಾನು ಸಹಿ ಮಾಡಿ ದೃಢೀಕರಿಸತಕ್ಕದ್ದು;

(ಹೆಚ್) ನಿಯಮಿಸಬಹುದಾದಂತೆ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು ಹಾಗೂ ನಿಯಮಿಸಬಹುದಾದ ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

9. ಪ್ರಾಧಿಕಾರದ ಅಧಿಕಾರಿಗಳು ಮತ್ತು ಇತರ ನೌಕರರು.- (1) ಸರ್ಕಾರವು, ಪ್ರಾಧಿಕಾರದ ಪ್ರಕಾರ್ಯಗಳನ್ನು ದಕ್ಷತೆಯಿಂದ ನೆರವೇರಿಸುವುದಕ್ಕಾಗಿ ಅಗತ್ಯವಾಗಬಹುದಾದ ಅಂಥ ಅಧಿಕಾರಿಗಳನ್ನು ಮತ್ತು ನೌಕರರನ್ನು ಪ್ರಾಧಿಕಾರಕ್ಕೆ ಒದಗಿಸತಕ್ಕದ್ದು.

(2) ಪ್ರಾಧಿಕಾರದ ಉದ್ದೇಶಕ್ಕಾಗಿ ನೇಮಕ ಮಾಡಲಾದ ಅಧಿಕಾರಿಗಳ ಮತ್ತು ಇತರ ನೌಕರರ ನೇಮಕಾತಿ ವಿಧಾನ, ಸಂದಾಯ ಮಾಡತಕ್ಕ ಸಂಬಳಗಳು ಮತ್ತು ಭತ್ಯೆಗಳು ಹಾಗೂ ಸೇವೆಯ ಇತರ ನಿಬಂಧನೆಗಳು ಮತ್ತು ಷರತ್ತುಗಳು ಇವುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

10. ಹೆಸರಿಸಲಾದ ಅಧಿಕಾರಿ.- (1) ಪ್ರಾಧಿಕಾರವು, ಕೆರೆಗಳ, ಕೊಳಗಳ, ಸರೋವರಗಳ ರಕ್ಷಣೆ, ಸಂರಕ್ಷಣೆ ಮತ್ತು ಅಭಿವೃದ್ಧಿಯನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಹಾಗೂ ಯಾವುದೇ ಇತರ ಉದ್ದೇಶಕ್ಕಾಗಿ ಒಂದು ಅಥವಾ ಹೆಚ್ಚು ಕೆರೆಗಳ, ಕೊಳಗಳ, ಸರೋವರಗಳ ಉಸ್ತುವಾರಿಯನ್ನು ವಹಿಸಿಕೊಳ್ಳುವುದಕ್ಕಾಗಿ, ಯಾವೊಬ್ಬ ಅಧಿಕಾರಿಯನ್ನು ಜಿಲ್ಲಾವಾರು ಹೆಸರಿಸಲಾದ ಅಧಿಕಾರಿಯೆಂದು ಹೆಸರಿಸಬಹುದು ಅಥವಾ ನೇಮಕ ಮಾಡಬಹುದು.

(2) ಹೆಸರಿಸಲಾದ ಅಧಿಕಾರಿಗಳು, ಈ ಅಧಿನಿಯಮದ ಅಡಿಯಲ್ಲಿಯ ಅಧಿಕಾರಗಳನ್ನು ಮತ್ತು ಪ್ರಾಧಿಕಾರವು ವಿಶೇಷ ಅಥವಾ ಸಾಮಾನ್ಯ ಆದೇಶದ ಮೂಲಕ ಅವರಿಗೆ ಪ್ರದಾನ ಮಾಡಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

(3) ಈ ಅಧಿನಿಯಮದ ಉಪಬಂಧಗಳ ಉಲ್ಲಂಘನೆಗಳ ಬಗ್ಗೆ ಯಾವೊಬ್ಬ ವ್ಯಕ್ತಿಯಿಂದ ದೂರುಗಳನ್ನು ಸ್ವೀಕರಿಸಲು ಹೆಸರಿಸಲಾದ ಅಧಿಕಾರಿಯು ಸಹ ಸಕ್ಷಮನಾಗಿರತಕ್ಕದ್ದು.

11. ಪ್ರಾಧಿಕೃತ ಅಧಿಕಾರಿ.- ಸರ್ಕಾರವು, ರಾಜ್ಯ ಸಿವಿಲ್ ಸೇವೆಗಳ ಗ್ರೂಪ್-ಎ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಒಬ್ಬ ಸರ್ಕಾರಿ ಅಧಿಕಾರಿಯನ್ನು ಅಥವಾ ನೀರಾವರಿ ಇಲಾಖೆಯ ಸಂಬಂಧಪಟ್ಟ ಜಿಲ್ಲೆಯ ಯಾವೊಬ್ಬ ಕಾರ್ಯನಿರ್ವಾಹಕ ಅಭಿಯಂತರನನ್ನು ಪ್ರಾಧಿಕೃತ ಅಧಿಕಾರಿಯಾಗಿ ನೇಮಕ ಮಾಡಬಹುದು; ಆತನು ಈ ಅಧಿನಿಯಮದ ಅಡಿಯಲ್ಲಿನ ಅಧಿಕಾರಗಳನ್ನು ಮತ್ತು ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

## ಅಧ್ಯಾಯ – III

## ಕೆರೆಗಳ ರಕ್ಷಣೆ

12. ಕೆರೆಗಳಲ್ಲಿ ನಿಷೇಧಿಸಲಾದ ಚಟುವಟಿಕೆಗಳು.- ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಇದಕ್ಕೆ ವಿರುದ್ಧವಾದುದು ಏನೇ ಇದ್ದರೂ, ಯಾವೊಬ್ಬ ವ್ಯಕ್ತಿಯು ಅಥವಾ ಸಂಸ್ಥೆಯು ಅಥವಾ ಸಂಘಟನೆಯು (ನೋಂದಾಯಿತವಾದ ಅಥವಾ ನೋಂದಾಯಿತವಾಗಿಲ್ಲದ) ಅಥವಾ ಕಂಪನಿಯು ಅಥವಾ ಫರ್ಮ್ ಅಥವಾ ಸಂಘವು, ಸರ್ಕಾರಿ ಇಲಾಖೆಗಳು, ನಿಗಮ ಅಥವಾ ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರವು ಮತ್ತು ಅವುಗಳ ಏಜೆಂಟರು ಅಥವಾ ನೌಕರರು ಅಥವಾ ಅವುಗಳ ಪರವಾಗಿ ಯಾವುದೇ ಸಂಸ್ಥೆಯು,-

(1) ನೀರನ್ನು ಸಂಗ್ರಹಿಸುವುದಕ್ಕಾಗಿ ಅಥವಾ ಹಿಡಿದಿಟ್ಟುಕೊಳ್ಳುವುದಕ್ಕಾಗಿ ಅಥವಾ 5ನೇ ಪ್ರಕರಣದ (9)ನೇ ಖಂಡದಲ್ಲಿ ಹೇಳಿದ ಉದ್ದೇಶದ ಹೊರತಾಗಿ ಇತರ ಯಾವುದೇ ಉದ್ದೇಶಕ್ಕಾಗಿ ಕೆರೆಯನ್ನು ಬಳಸತಕ್ಕದ್ದಲ್ಲ;

(2) ಸರ್ಕಾರದ ಅನುಮತಿ ಇಲ್ಲದೆ ಕೆರೆ ಭೂಮಿಯ ಮೇಲೆ ಯಾವುದೇ ರಚನೆಯನ್ನು ನಿರ್ಮಿಸತಕ್ಕದ್ದಲ್ಲ, ಯಾವುದೇ ಕೆರೆ ಭೂಮಿಯನ್ನು ಅಥವಾ ಅದರ ಯಾವುದೇ ಭಾಗವನ್ನು ಅಧಿಭೋಗಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ, ಅಥವಾ ಪ್ರವಾಹದ ವಿರುದ್ಧವಾಗಿ ಮತ್ತು ಪ್ರವಾಹದ ಹರಿವಿನಲ್ಲಿರುವ ಕೆರೆಯಲ್ಲಿ ಅಥವಾ ಕೆರೆಯಿಂದ ನೀರು ಹರಿದು ಬರುತ್ತಿರುವ ಅಥವಾ ನೀರು ಹರಿದು ಹೋಗುತ್ತಿರುವ ಸ್ವಾಭಾವಿಕ ಅಥವಾ ಸಾಮಾನ್ಯವಾಗಿ ನೀರು ಹರಿಯುತ್ತಿರುವುದಕ್ಕೆ ಯಾವುದೇ ಅಡ್ಡಿಯನ್ನು ಉಂಟು ಮಾಡತಕ್ಕದ್ದಲ್ಲ;

(3) ಕೆರೆಯ ಹೊರಗಿನ ಸರಹದ್ದಿನಿಂದ ಮೂವತ್ತು ಮೀಟರುಗಳೊಳಗೆ ಅಕ್ರಮ ಮತ್ತು ಅನಧಿಕೃತವಾಗಿ ಯಾವುದೇ ವಾಣಿಜ್ಯ, ಮನರಂಜನೆ ಅಥವಾ ಕೈಗಾರಿಕಾ ಸಂಕೀರ್ಣಗಳನ್ನು ಅಥವಾ ಮನೆಗಳನ್ನು ಕಟ್ಟತಕ್ಕದ್ದಲ್ಲ ಅಥವಾ ಯಾವುದೇ ಕೈಗಾರಿಕಾ ಚಟುವಟಿಕೆಗಳನ್ನು ನಡೆಸತಕ್ಕದ್ದಲ್ಲ;

(5) ಸದಸ್ಯನಾಗಿ ಆತನ ಕರ್ತವ್ಯಗಳನ್ನು ನಿರ್ವಹಿಸಲು ಹಾನಿಕಾರ ಪರಿಣಾಮವನ್ನುಂಟು ಮಾಡುವ ಅಂಥ ಹಣಕಾಸು ಅಥವಾ ಇತರ ಹಿತಾಸಕ್ತಿಯನ್ನು ಹೊಂದಿದ್ದಾನೆ,

– ಎಂದು ಸರ್ಕಾರವು ಅಭಿಪ್ರಾಯಪಟ್ಟರೆ, ಆತನನ್ನು ಪ್ರಾಧಿಕಾರದಿಂದ ತೆಗೆದುಹಾಕತಕ್ಕದ್ದು."

**10. 8ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 8ನೇ ಪ್ರಕರಣದ (2) ಉಪಪ್ರಕರಣದ (ಜಿ) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಜಿಎ) ಕೆರೆಗಳ ಪುನ:ಭರ್ತಿ ಅಥವಾ ಅಭಿವೃದ್ಧಿ ಅಥವಾ ನಿರ್ವಹಣೆಗಾಗಿ ನಿಧಿಯನ್ನು ಕೋರುವುದು".

**11. 9ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 9ನೇ ಪ್ರಕರಣದಲ್ಲಿ (2)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3) ಪ್ರಾಧಿಕಾರವು, ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ, ಈ ಅಧಿನಿಯಮದ ಅಡಿಯಲ್ಲಿ ತನ್ನ ಪ್ರಕಾರ್ಯಗಳನ್ನು ನೆರವೇರಿಸಲು ಅವಶ್ಯವೆಂದು ಅದು ಪರಿಗಣಿಸಬಹುದಾದಂತೆ ಪ್ರಾಧಿಕಾರದಲ್ಲಿನ ಅಂಥ ಸಂಖ್ಯೆಯ ಅಧಿಕಾರಿಗಳು ಮತ್ತು ಇತರ ಸಿಬ್ಬಂದಿಯ ಪ್ರವರ್ಗವನ್ನು ಸೃಷ್ಟಿಸಬಹುದು.

(4) ಪ್ರಾಧಿಕಾರವು, ಈ ಅಧಿನಿಯಮದ ಅಡಿಯಲ್ಲಿ ತನ್ನ ಪ್ರಕಾರ್ಯಗಳನ್ನು ನೆರವೇರಿಸಲು ಅವಶ್ಯವೆಂದು ಪರಿಗಣಿಸಬಹುದಾದ ಅಂಥ ತಜ್ಞ ಮತ್ತು ತಾಂತ್ರಿಕ ವ್ಯಕ್ತಿಗಳನ್ನು ಕರಾರಿನ ಆಧಾರದ ಮೇಲೆ ಕೂಡ ತೊಡಗಿಸಿಕೊಳ್ಳಬಹುದು."

**12. 10ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 10ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ "ಯಾವೊಬ್ಬ ಅಧಿಕಾರಿಯನ್ನು" ಎಂಬ ಪದಗಳಿಗೆ "ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಯಾವೊಬ್ಬ ಸರ್ಕಾರದ ಅಧಿಕಾರಿಯನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**13. 11ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ನೇ ಪ್ರಕರಣದಲ್ಲಿ "ಅಥವಾ ನೀರಾವರಿ ಇಲಾಖೆಯ ಸಂಬಂಧಪಟ್ಟ ಜಿಲ್ಲೆಯ ಯಾವೊಬ್ಬ ಕಾರ್ಯನಿರ್ವಾಹಕ ಅಭಿಯಂತರನನ್ನು" ಎಂಬ ಪದಗಳಿಗೆ "ಕಂದಾಯ ಇಲಾಖೆಯ ಗ್ರೂಪ್ 'ಎ' ಶ್ರೇಣಿಯ ಹಿರಿಯ ಅಧಿಕಾರಿಯನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**14. 12ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 12ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದಲ್ಲಿ "ಸರ್ಕಾರದ ಅನುಮತಿ ಇಲ್ಲದೆ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ii) (3)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(3) ಕೆರೆಯ ಹೊರಗಿನ ಸರಹದ್ದಿನಿಂದ ಮೂವತ್ತು ಮೀಟರುಗಳೊಳಗೆ ಯಾವುದೇ ವಾಣಿಜ್ಯ ಅಥವಾ ಮನರಂಜನೆ ಅಥವಾ ಕೈಗಾರಿಕಾ ಸಂಕೀರ್ಣಗಳನ್ನು ಕಟ್ಟತಕ್ಕದ್ದಲ್ಲ ಅಥವಾ ಯಾವುದೇ ಕೈಗಾರಿಕಾ ಚಟುವಟಿಕೆಗಳನ್ನು ನಡೆಸತಕ್ಕದ್ದಲ್ಲ" ಮತ್ತು

(iii) (6)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(6) ಕೆರೆಯ ಒಡ್ಡು ಸೇರಿದಂತೆ ಕೆರೆ ಪ್ರದೇಶದೊಳಗೆ ರಸ್ತೆಗಳನ್ನು, ಸೇತುವೆಗಳನ್ನು ಮತ್ತು ಅದೇ ರೀತಿಯ ಇತರ ರಚನೆಗಳನ್ನು ನಿರ್ಮಿಸತಕ್ಕದ್ದಲ್ಲ: ಪ್ರಾಧಿಕಾರವು, ಅಂಥ ಕಾಮಗಾರಿಯ ತರುವಾಯವೂ ಕೆರೆಗಳ ಮೂಲ ಸಾಮರ್ಥ್ಯವು ಕಡಿಮೆಯಾಗುವುದಿಲ್ಲ ಎಂಬುದನ್ನು ಖಚಿತಪಡಿಸಿಕೊಂಡ ತರುವಾಯ ಮಾತ್ರವೇ ಅಂಥ ಕಾಮಗಾರಿಗಳಿಗೆ ಅನುಮತಿಯನ್ನು ನೀಡಬಹುದು."

**15. 13ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 13ನೇ ಪ್ರಕರಣದ (3)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ.–

"(4) ಪ್ರಾಧಿಕಾರವು, ಕೆರೆಗಳ ರಕ್ಷಣೆಯಲ್ಲಿ ಯಾವುದೇ ಕೆರೆಯ ಅಭಿರಕ್ಷಕನಿಗೆ ನೆರವಾಗಲು ಸರ್ಕಾರದ ಅಥವಾ ಸ್ಥಳೀಯ ನಿಕಾಯಗಳ ಯಾವೊಬ್ಬ ಅಧಿಕಾರಿಗೆ ನಿರ್ದಿಷ್ಟ ನಿರ್ದೇಶನಗಳನ್ನು ನೀಡಬಹುದು."

**16. 14ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 14ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದ ಪರಂತುಕದಲ್ಲಿ "ರಾಜ್ಯ ಸರ್ಕಾರಕ್ಕೆ" ಎಂಬ ಪದಗಳಿಗೆ "ರಾಜ್ಯ ಸರ್ಕಾರಕ್ಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) ಪರಂತುಕದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3) ಸ್ವಾಧೀನ ಪಡಿಸಿಕೊಳ್ಳಲಾದುದಕ್ಕೆ ಸಂಬಂಧಿಸಿದ ಅಪರಾಧದ ವಿಚಾರಣೆಯನ್ನು ನಡೆಸಲು ಅಧಿಕಾರ ವ್ಯಾಪ್ತಿ ಹೊಂದಿರುವ ಮ್ಯಾಜಿಸ್ಟ್ರೇಟರ ಮುಂದೆ ಬಂಧಿತ ವ್ಯಕ್ತಿಗಳನ್ನು ಹಾಜರುಪಡಿಸತಕ್ಕದ್ದು."

**17. 22ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 22ನೇ ಪ್ರಕರಣದ (5)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(6) ಜಿಲ್ಲೆಯ ಜಿಲ್ಲಾಧಿಕಾರಿ ಮತ್ತು ಪೋಲೀಸ್ ಅಧೀಕ್ಷಕರು, ಯಾವುದೇ ಕೆರೆಯ ಒತ್ತುವರಿಯನ್ನು ತೆಗೆದುಹಾಕಲು ಪ್ರಾಧಿಕಾರವು ಅಗತ್ಯಪಡಿಸಬಹುದಾದ ಬೆಂಬಲವನ್ನು ನೀಡತಕ್ಕದ್ದು".

**18. 35ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 35ನೇ ಪ್ರಕರಣದ (3)ನೇ ಉಪಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**19. 2015ರ ಕರ್ನಾಟಕ ಅಧಿನಿಯಮ 10ರ ನಿರಸನ ಮತ್ತು ಉಳಿಸುವಿಕೆಗಳು.–** (1) ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2014ನ್ನು (2015ರ ಕರ್ನಾಟಕ ಅಧಿನಿಯಮ 10) ಈ ಮೂಲಕ ನಿರಸನಗೊಳಿಸಲಾಗಿದೆ:

ಅನುಬಂಧ-2

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ತಿಪ್ಪಗೊಂಡನಹಳ್ಳಿ ಜಲಾಶಯ ಮತ್ತು ಜಲಾನಯನ ಪ್ರದೇಶದ ಅರ್ಕಾವತಿ ಮತ್ತು ಕುಮುದ್ವತಿ ನದಿಗಳ ಜಲಾನಯನ ಪ್ರದೇಶದ ವ್ಯಾಪ್ತಿಯಲ್ಲಿ ಬಫರ್ ಜೋನ್ ನಿಗದಿಪಡಿಸುವ ಬಗ್ಗೆ.

ಓದಲಾಗಿದೆ: 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್‌ಇಇ 215 ಇಪಿಸಿ 2000, ದಿನಾಂಕ: 18.11.2003.
2. ಸರ್ಕಾರದ ಆದೇಶ ಸಂಖ್ಯೆ: ಅಪಜೀ 01 ಇಪಿಸಿ 2011, ದಿನಾಂಕ: 24.07.2014.

** ** **

ಪ್ರಸ್ತಾವನೆ:

ಮೇಲೆ ಓದಲಾದ ಕ್ರಮ ಸಂಖ್ಯೆ(1)ರಲ್ಲಿನ ಸರ್ಕಾರದ ಅಧಿಸೂಚನೆ ದಿನಾಂಕ 18.11.2003ರಲ್ಲಿ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಪರಿಸರ (ನಿಯಂತ್ರಣ) ಕಾಯ್ದೆ 1986ರ ಸೆಂ. 5 ರಡಿಯಲ್ಲಿ ಅರ್ಕಾವತಿ ಮತ್ತು ಕುಮುದ್ವತಿ ನದಿಗಳನ್ನು ರಕ್ಷಿಸಿ ತಿಪ್ಪಗೊಂಡನಹಳ್ಳಿ ಜಲಾಶಯದ ಒಳಹರಿವು ಹೆಚ್ಚಿಸುವ ದೃಷ್ಟಿಯಿಂದ ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶವನ್ನು ಈ ಕೆಳಕಂಡಂತೆ ನಾಲ್ಕು ವಲಯಗಳನ್ನಾಗಿ ವಿಂಗಡಿಸಿ, ಪ್ರತಿ ವಲಯದಲ್ಲಿ ಯಾವ ಯಾವ ಚಟುವಟಿಕೆಗಳನ್ನು ಅನುಮತಿಸಬಹುದು ಮತ್ತು ಯಾವ ಚಟುವಟಿಕೆಗಳನ್ನು ನಿಷೇಧಿಸಲಾಗಿದೆ ಎಂಬ ಷರತ್ತುಗಳನ್ನು ವಿಧಿಸಲಾಗಿರುತ್ತದೆ.

| Zone | Area Covered | Nature of restricted/regulated activities |
|---|---|---|
| (1) | (2) | (3) |
| Zone-1 | Entire Tippagondanahalli Reservoir (TGR) catchment area specified in Annexure to this Notification. | a) Regulation and checking over exploitation of ground water.<br>b) No fresh leases or licence for mining, quarrying and stone crushers shall be granted.<br>c) No person shall dispose solid as well as liquid waste in this area without scientific Processing.<br>d) To ensure adoption of rain water harvesting systems in all the new and existing buildings within six months from the date of issue of this order.<br>e) To promote organic farming including bio-fertilizers and bio-pesticide. |
| Zone-2 | Area covered within 2 kms from the Tippagondana halli Reservoir (TGR) boundary | No person shall carry on activities other than Agricultural or Agriculture related activities without prior permission. |

| | | |
|---|---|---|
| Zone-3 | Area covered within 1 km distance from the river banks of Arkavathy (only upto Hesarghatta tank from TGR) and Kumudvathi | No person shall carry on activities other than Agriculture or Agriculture related activities without prior permission |
| Zone-4 | Area covered within 1 km to 2 Km distance from the river banks of Arkavathy (only upto Hesaraghatta Tank from TGR) and Kumudvathi (Excluding the areas falling within zone 2) | a) Permit only those industrial activities which are listed as Green category, by the Karnataka State Pollution Control Board with mandatory adoption of rainwater harvesting systems and waste water treatment facilities. The other regulatory/civic agencies to issue permit only after Consent form Establishment (CFE) is obtained from the KSPCB.<br>b) Permit new buildings with only ground and first floor with mandatory adoption of rainwater harvesting systems. |

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಆದೇಶದಲ್ಲಿ ದಿನಾಂಕ: 18-11-2003ರ ಅಧಿಸೂಚನೆಯನ್ನು ಹಿಂಪಡೆದು, ಈ ವಿಷಯದ ಕುರಿತು ಹೊಸದಾಗಿ ಅಧಿಸೂಚನೆ ಹೊರಡಿಸುವವರೆಗೂ ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದಲ್ಲಿ ಯಾವುದೇ ಹೊಸ ಅನಧಿಕೃತ ಕಟ್ಟಡಗಳು ಹಾಗೂ ಕೃಷಿಯೇತರ ಚಟುವಟಿಕೆಗಳಿಗೆ ಮಂಜೂರಾತಿ ನೀಡಬಾರದೆಂದು ಆದೇಶಿಸಲಾಗಿರುತ್ತದೆ.

ಸದರಿ ಆದೇಶಕ್ಕೆ ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ:38218/2013ರಲ್ಲಿ ದಿನಾಂಕ: 28-07-2014ರಂದು ತಡೆಯಾಜ್ಞೆ ನೀಡಿರುತ್ತದೆ. ದಿನಾಂಕ: 12-08-2014ರಂದು ಮಾನ್ಯ ಕಾನೂನು ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಬಗ್ಗೆ ಪುನರ್ ಪರಿಶೀಲಿಸಲು ಹಾಗೂ ಪ್ರಸ್ತುತ ಪರಿಸ್ಥಿತಿಯ ಬಗ್ಗೆ ಸಮಗ್ರ ಅಧ್ಯಯನ ಕೈಗೊಳ್ಳಲು ಎಂಪ್ರಿ (EMPRI)ಸಂಸ್ಥೆಗೆ ವಹಿಸಲು ತೀರ್ಮಾನಿಸಲಾಗಿರುತ್ತದೆ. ಅದರಂತೆ ಎಂಪ್ರಿ ಸಂಸ್ಥೆಯು ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದ ಅಧ್ಯಯನ ಕೈಗೊಂಡು ದಿನಾಂಕ: 05-09-2015ರಂದು ಅಂತಿಮ ವರದಿಯನ್ನು ಸಲ್ಲಿಸಿರುತ್ತದೆ.

ಸದರಿ ವಿಷಯದ ಕುರಿತು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಹಲವಾರು ರಿಟ್ ಅರ್ಜಿಗಳು ~~ಸಲ್ಲಿಕೆಯಾಗಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ಪ್ರಶ್ನಿತ~~ ಅಧಿಸೂಚನೆಯನ್ನು ಮುಂದುವರೆಸುವ ಬಗ್ಗೆ ಅಥವಾ ತಿಪ್ಪಗೊಂಡನಹಳ್ಳಿ ಜಲಾಶಯ ಜಲಾನಯನ ಪ್ರದೇಶದ ಸಂರಕ್ಷಣೆಗಾಗಿ ಇನ್ನಿತರ ಯಾವುದೇ ಅಧಿಸೂಚನೆಯನ್ನು ಹೊರಡಿಸುವ ಬಗ್ಗೆ ಸರ್ಕಾರದ ನಿಲುವನ್ನು ತಿಳಿಸುವಂತೆ ಕೋರಿರುತ್ತದೆ.

ಕುಡಿಯುವ ನೀರಿನ ಜಲಾಶಯ ಮತ್ತು ಅದಕ್ಕೆ ನೀರೊದಗಿಸುವ ನದಿ ಮೂಲಗಳ ಸಂರಕ್ಷಣೆಗೆ ಸಂಬಂಧಿಸಿದಂತೆ ನಿರ್ದಿಷ್ಟವಾಗಿ ಒದಗಿಸಬೇಕಾದ ಬಫರ್ ಝೋನ್ ಬಗ್ಗೆ ಯಾವುದೇ ನಿಖರ ವೈಜ್ಞಾನಿಕ ಮಾರ್ಗಸೂಚಿಗಳು ಕಂಡುಬಂದಿರುವುದಿಲ್ಲ. ಅಲ್ಲದೇ ದೇಶದ ಪ್ರಮುಖ ನದಿಯಾದ ಗಂಗಾ ನದಿಗೆ ಸಂಬಂಧಿಸಿದಂತೆ 100ಮೀ ಬಫರ್ ಅನ್ನು ನಿಗದಿಪಡಿಸಲಾಗಿದ್ದು, ಇತರೆ ಯಾವುದೇ ರಾಜ್ಯಗಳ ನದಿ ಪಾತ್ರಗಳಲ್ಲಿಯೂ ಸಹ ಈ ರೀತಿ ನಿರ್ಬಂಧ ವಿಧಿಸಿರುವುದು ಕಂಡು ಬಂದಿರುವುದಿಲ್ಲ.

ರಾಷ್ಟ್ರೀಯ ಹಸಿರು ನ್ಯಾಯಮಂಡಳಿಯು ದಿನಾಂಕ 04-05-2016ರಂದು ನೀಡಿರುವ ಆದೇಶದಲ್ಲಿ ಬೆಂಗಳೂರು ನಗರಕ್ಕೆ ಸಂಬಂಧಿಸಿದಂತೆ ಬಫರ್ ಜೋನ್ ಅನ್ನು ಈ ಕೆಳಕಂಡಂತೆ ನಿಗದಿಪಡಿಸಲು ಆದೇಶಿಸಿತ್ತು.

(i) In the case of Lakes, 75m from the periphery of water body to be maintained as green belt and buffer zone for all existing water bodies i.e., lakes/wetlands.
(ii) 50m from the edge of the primary Rajkulewas.
(iii) 35m from the edges in the case of secondary Rajkulewas.
(iv) 25m from the edges in the case of tertiary Rajkulewas.

ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಮಂಡಳಿಯ ದಿನಾಂಕ:04-05-2016ರ ಆದೇಶವನ್ನು ಪ್ರಶ್ನಿಸಿ ಸರ್ವೋಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಲಾಗಿದ್ದು, ಮಾನ್ಯ ಸರ್ವೋಚ್ಚ ನ್ಯಾಯಾಲಯವು ದಿನಾಂಕ:05.03.2019ರಂದು ನೀಡಿರುವ ತೀರ್ಪಿನಲ್ಲಿ ರಾಷ್ಟ್ರೀಯ ಹಸಿರು ನ್ಯಾಯಮಂಡಳಿಯ ದಿನಾಂಕ:04-05-2016ರ ಆದೇಶವನ್ನು ರದ್ದುಪಡಿಸಿರುತ್ತದೆ.

ಅರ್ಕಾವತಿ ಮತ್ತು ಕುಮುದ್ವತಿ ಕಾಲುವೆ ಪಾತ್ರದ ಗ್ರಾಮಗಳು (ವಲಯ-3)ರಲ್ಲಿನ 126 ಗ್ರಾಮಗಳ ಜನರಿಗೆ ದಿನಾಂಕ:18-11-2003ರ ಅಧಿಸೂಚನೆಯಿಂದಾಗಿರುವ ತೊಂದರೆಗಳ ಕುರಿತಂತೆ ಅಂದಿನ ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಸಣ್ಣ ನೀರಾವರಿ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ:21-11-2017 ರಂದು ನಡೆದ ಸಭೆಯಲ್ಲಿ ಈ ಕೆಳಕಂಡಂತೆ ಬಫರ್ ಜೋನ್ ನಿಗದಿಪಡಿಸುವ ಬಗ್ಗೆ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿರುತ್ತದೆ.

| | | |
|---|---|---|
| 4 | Bangalore Metropolitan Region Development Authority -Bangalore Metropolitan Revised Structure Plan-2031 | I. 30 m. from the edge of primary natural drainage channel.<br>II. 15 m. from the edge of secondary natural drainage channel.<br>III. 10 m. from the edge of tertiary natural drainage channel. |

Cy

ಈ ಬಗ್ಗೆ ಹಲವಾರು ಹಂತಗಳಲ್ಲಿ, ಸಭೆಗಳನ್ನು ಏರ್ಪಡಿಸಿ ಚರ್ಚಿಸಲಾಗಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ದಿನಾಂಕ: 18.11.2003ರ ಅಧಿಸೂಚನೆಯಲ್ಲಿ ತಿಪ್ಪಗೊಂಡನಹಳ್ಳಿ ಜಲಾಶಯ ಮತ್ತು ಅದರ ವ್ಯಾಪ್ತಿಯಲ್ಲಿ 04 ಜೋನ್‌ಗಳನ್ನು ನಿಗದಿಪಡಿಸಿದ್ದು, ಅರ್ಕಾವತಿ ಮತ್ತು ಕುಮುದ್ವತಿ ನದಿಗಳ ಅಕ್ಕಪಕ್ಕದಲ್ಲಿ 02 ಕಿ.ಮೀ.ನಷ್ಟು ಅಂತರದವರೆಗೆ ಅಭಿವೃದ್ಧಿಗಳಿಗೆ ನಿರ್ಬಂಧ ವಿಧಿಸಲಾಗಿರುವುದರಿಂದ, ಸದರಿ ಪ್ರದೇಶದ ವ್ಯಾಪ್ತಿಯಲ್ಲಿ ಅಭಿವೃದ್ಧಿಗಳು ಕುಂಠಿತವಾಗಿದ್ದು, ರಾಜ್ಯದ ಯಾವುದೇ ನದಿಗಳ ವ್ಯಾಪ್ತಿಯಲ್ಲಿ ಸಹ ಇಷ್ಟು ಅಂತರದವರೆಗೆ ಬಫರ್ ಜೋನ್ ಅನ್ನು ನಿಗದಿಪಡಿಸಿರುವುದಿಲ್ಲದಿರುವುದನ್ನು ಪರಿಶೀಲಿಸಲಾಗಿದೆ.

ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದ ಸಂರಕ್ಷಣೆಗಾಗಿ ದಿನಾಂಕ:18.11.2003ರ ಅಧಿಸೂಚನೆಯನ್ನು ಮುಂದುವರೆಸುವ ಬಗ್ಗೆ ಅಥವಾ ಪರ್ಯಾಯ ಕ್ರಮಗಳನ್ನು ಕೈಗೊಳ್ಳುವ ಬಗ್ಗೆ ಸರ್ಕಾರದ ನಿಲುವನ್ನು ಮಾನ್ಯ ಉಚ್ಚ ನ್ಯಾಯಾಲಯಕ್ಕೆ ತಿಳಿಸುವ ಸಂಬಂಧ ವಿಷಯವನ್ನು ಅರಣ್ಯ ಜೀವಿ ಪರಿಸ್ಥಿತಿ ಮತ್ತು ಪರಿಸರ ಇಲಾಖೆಯು ಸಚಿವ ಸಂಪುಟದ ಮುಂದೆ ತಂದಿದ್ದು, ದಿನಾಂಕ:28.06.2019ರಂದು ನಡೆದ ಸಚಿವ ಸಂಪುಟದ ಸಭೆಯಲ್ಲಿ ಈ ಕೆಳಕಂಡಂತೆ ತೀರ್ಮಾನ ತೆಗೆದುಕೊಳ್ಳಲಾಗಿರುತ್ತದೆ.

"ಮಾನ್ಯ ಸರ್ವೋಚ್ಚ ನ್ಯಾಯಾಲಯವು ಸಿವಿಲ್ ಅಪೀಲ್ ಸಂಖ್ಯೆ: 5016/2016ರಲ್ಲಿ ದಿನಾಂಕ: 05.03.2019ರಂದು ನೀಡಿದ ತೀರ್ಪನ್ನು ಹಾಗೂ ದಿನಾಂಕ: 21.11.2017ರಂದು ಅಂದಿನ ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಸಣ್ಣ ನೀರಾವರಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನವನ್ನು ಗಮನದಲ್ಲಿಟ್ಟುಕೊಂಡು ತಿಪ್ಪಗೊಂಡನಹಳ್ಳಿ ಜಲಾಶಯ ಹಾಗೂ ಅದರ ಜಲಾನಯನ ಪ್ರದೇಶದಲ್ಲಿನ ಅರ್ಕಾವತಿ ಮತ್ತು ಕುಮುದ್ವತಿ ನದಿಗಳ ಅಕ್ಕಪಕ್ಕದಲ್ಲಿ ಬಫರ್ ಜೋನ್‌ನ್ನು ನಗರಾಭಿವೃದ್ಧಿ ಇಲಾಖೆಯು ಸೂಕ್ತವಾಗಿ ನಿಗದಿಪಡಿಸಲು ಸಚಿವ ಸಂಪುಟವು ನಿರ್ಣಯಿಸಿತು"

ಸಚಿವ ಸಂಪುಟದ ತೀರ್ಮಾನದ ಹಿನ್ನೆಲೆಯಲ್ಲಿ, ತಿಪ್ಪಗೊಂಡನಹಳ್ಳಿ ಜಲಾಶಯ ಹಾಗೂ ಅದರ ಜಲಾನಯನ ಪ್ರದೇಶದಲ್ಲಿನ ಅರ್ಕಾವತಿ ಮತ್ತು ಕುಮುದ್ವತಿ ನದಿಗಳ ಅಕ್ಕಪಕ್ಕದಲ್ಲಿ ಸೂಕ್ತ ಬಫರ್ ಜೋನ್ ಅನ್ನು ನಿಗದಿಪಡಿಸುವ ಸಂಬಂಧ ಸೂಕ್ತ ನಿರ್ಣಯ ಕೈಗೊಳ್ಳಲು ದಿನಾಂಕ:06.07.2019 ಮತ್ತು 18.07.2019 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ರವರ ಅಧ್ಯಕ್ಷತೆಯಲ್ಲಿ ವಿವಿಧ ಇಲಾಖೆಗಳೊಂದಿಗೆ ಚರ್ಚಿಸಲಾಗಿದೆ.

ಮಾನ್ಯ ಉಪ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 20.07.2019ರಂದು ನಡೆದ ಸಭೆಯಲ್ಲಿ 1) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ಅಪಜೀ 215 ಇಎಸ್‌ವಿ 2000, ದಿನಾಂಕ: 18.11.2003ರಲ್ಲಿ Zone-1 & Zone-2 ವ್ಯಾಪ್ತಿಯ ಪ್ರದೇಶ ಮತ್ತು ನಿರ್ಬಂಧಿತ ಚಟುವಟಿಕೆಗಳನ್ನು ಯಥಾಸ್ಥಿತಿ ಮುಂದುವರೆಸಲು, 2) Zone-3 ವಲಯದ ವ್ಯಾಪ್ತಿಯ ಪ್ರದೇಶವನ್ನು ಅರ್ಕಾವತಿ ಮತ್ತು ಕುಮುದ್ವತಿ ನದಿಗಳ ತೀರದ ಅಂಚಿನಿಂದ 1.00ಕಿ.ಮೀ. ಅಂತರಕ್ಕೆ ಬದಲಾಗಿ 500 ಮೀಟರ್‌ಗಳಿಗೆ ಮಿತಿಗೊಳಿಸಲು ಹಾಗೂ ದಿನಾಂಕ: 18.11.2003ರ ಅಧಿಸೂಚನೆಯಲ್ಲಿ ನಮೂದಿಸಿರುವ ನಿಯಂತ್ರಿತ ಚಟುವಟಿಕೆಗಳನ್ನು ಯಥಾಸ್ಥಿತಿಯಲ್ಲಿ ಮುಂದುವರೆಸಲು ತೀರ್ಮಾನಿಸಲಾಗಿರುತ್ತದೆ.

ಅಲ್ಲದೇ, Zone-4 ವಲಯದ ವ್ಯಾಪ್ತಿಯ ಪ್ರದೇಶವನ್ನು 1 ರಿಂದ 2 ಕಿ.ಮೀ. ಬದಲು 500ಮೀಟರ್‌ನಿಂದ 1 ಕಿ.ಮೀ.ಗೆ ಮಿತಿಗೊಳಿಸಿ ದಿನಾಂಕ:18.11.2003ರ ಅಧಿಸೂಚನೆಯಲ್ಲಿ ನಮೂದಿಸಿರುವ ಹಲವು ನಿರ್ಬಂಧಿತ ಚಟುವಟಿಕೆಗಳನ್ನು ಮುಂದುವರೆಸಿ, ಹಲವು ನಿರ್ಬಂಧಗಳೊಂದಿಗೆ ಶೈಕ್ಷಣಿಕ ಮತ್ತು ವೈದ್ಯಕೀಯ ಸಂಸ್ಥೆಗಳು, ಆಸ್ಪತ್ರೆಗಳು, ಸರ್ಕಾರಿ ಹಾಸ್ಟೆಲ್‌ಗಳು ಮತ್ತು ವಸತಿ ಕಟ್ಟಡಗಳಿಗೆ ಅನುಮತಿಸುವುದನ್ನು ಅಳವಡಿಸಿಕೊಳ್ಳಲು ಹಾಗೂ ಈ ಪ್ರದೇಶಗಳಲ್ಲಿನ ವ್ಯಾಪ್ತಿಯಲ್ಲಿ ಬಫರ್ ಜೋನ್ ಅನ್ನು ಬೆಂಗಳೂರು ಮಹಾನಗರ ಪ್ರದೇಶದ ಪರಿಷ್ಕೃತ ರಚನಾ ನಕ್ಷೆ-2031ರಲ್ಲಿ ನಿಗದಿಪಡಿಸಿರುವಂತೆ, ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಹಾಗೂ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ವ್ಯಾಪ್ತಿಯಲ್ಲಿನ ಎಲ್ಲಾ ನಗರ ಯೋಜನಾ ಪ್ರಾಧಿಕಾರಗಳು ಅವರವರ ವಲಯ ನಿಯಮಾವಳಿಗಳಲ್ಲಿ ಖಡ್ಡಾಯವಾಗಿ ಅಳವಡಿಸಿಕೊಳ್ಳಲು ತೀರ್ಮಾನಿಸಲಾಗಿರುತ್ತದೆ.

- Water bodies / Lakes – a buffer of 30.0 mtr from the edge of the Lake.
- Primary natural drainage channel (valleys)- a buffer of 30.0mtr from the edge of primary natural drainage channel.
- Secondary natural drainage channel(valleys) - a buffer of 15.0mtr from the edge of the secondary drainage channel.
- Tertiary natural drainage channel (valleys) - a buffer of 10.00mtr from the edge of the tertiary natural drainage channel.

ಈ ಬಫರ್ ಜೋನ್‌ಗಳನ್ನು non-urbanisable Zone ಗಳಾಗಿ ನಿರ್ವಹಿಸುವುದು.

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿ, ತಿಪ್ಪಗೊಂಡನಹಳ್ಳಿ ಜಲಾಶಯ ಮತ್ತು ಜಲಾನಯನ ಪ್ರದೇಶದ ಸಂರಕ್ಷಣೆಯನ್ನು ಗಮನದಲ್ಲಿಟ್ಟುಕೊಂಡು ಎಂಪ್ರಿ(EMPRI) ಸಂಸ್ಥೆಯು ಸಲ್ಲಿಸಿರುವ ವರದಿಯಲ್ಲಿನ ಹಲವು ಶಿಫಾರಸ್ಸುಗಳನ್ನು ಪರಿಗಣಿಸಿ, ಸದರಿ ಪ್ರದೇಶದ ವ್ಯಾಪ್ತಿಯಲ್ಲಿ ಹಲವು ನಿರ್ಬಂಧಗಳನ್ನು ವಿಧಿಸಿ ಹಾಗೂ ಸದರಿ ಪ್ರದೇಶದ ಅಭಿವೃದ್ಧಿಯನ್ನು ಸಹಾ ಗಮನದಲ್ಲಿರಿಸಿಕೊಂಡು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 11 ಬಿಎಂಆರ್ 2017, ಬೆಂಗಳೂರು, ದಿನಾಂಕ: 20.07.2019**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಹಾಗೂ ಸಚಿವ ಸಂಪುಟವು ದಿನಾಂಕ: 28.06.2019ರಂದು ನಡೆದ ಸಭೆಯಲ್ಲಿ ಕೈಗೊಂಡ ನಿರ್ಣಯದ ಹಿನ್ನೆಲೆಯಲ್ಲಿ ತಿಪ್ಪಗೊಂಡನಹಳ್ಳಿ ಜಲಾಶಯ ಮತ್ತು ಜಲಾನಯನ ಪ್ರದೇಶದ ಅರ್ಕಾವತಿ ಮತ್ತು ಕುಮುದ್ವತಿ ನದಿಗಳ ಜಲಾನಯನ ಪ್ರದೇಶದ ವ್ಯಾಪ್ತಿಯಲ್ಲಿ ಬಫರ್ ಜೋನ್ ಅನ್ನು ಈ ಕೆಳಕಂಡಂತೆ ನಿಗದಿಪಡಿಸಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಹಾಗೂ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ವ್ಯಾಪ್ತಿಯಲ್ಲಿನ ಎಲ್ಲಾ ನಗರ ಯೋಜನಾ ಪ್ರಾಧಿಕಾರಗಳಿಗೆ ಅವರವರ ವಲಯ ನಿಯಮಾವಳಿಗಳಲ್ಲಿ ಖಡ್ಡಾಯವಾಗಿ ಅಳವಡಿಸಿಕೊಳ್ಳಲು ಆದೇಶಿಸಲಾಗಿದೆ:

- Water bodies / Lakes – a buffer of 30.0 mtr from the edge of the Lake.
- Primary natural drainage channel (valleys) - a buffer of 30.0mtr from the edge of primary natural drainage channel.
- Secondary natural drainage channel (valleys) - a buffer of 15.0mtr from the edge of the secondary natural drainage channel.
- Tertiary natural drainage channel (valleys) - a buffer of 10.00mtr from the edge of the tertiary natural drainage channel.

ಈ ಬಫರ್ ಜೋನ್‌ಗಳನ್ನು non-urbanisable Zone ಗಳಾಗಿ ನಿರ್ವಹಿಸುವುದು.

ಅಲ್ಲದೇ, ಅಧಿಸೂಚನೆ ಸಂಖ್ಯೆ: ಅಪಜೀ 215 ಇಎನ್‌ವಿ 2003, ದಿನಾಂಕ: 18.11.2003ರಲ್ಲಿ ನಿಗದಿಪಡಿಸಿರುವ Zone-1, 2, 3 & 4 ರ ವಲಯಗಳಿಗೆ ಬಫರ್ ಜೋನ್ ಅನ್ನು ಹಾಗೂ ನಿರ್ಬಂಧಿತ ಚಟುವಟಿಕೆಗಳನ್ನು ಅನುಬಂಧ-I ರಲ್ಲಿರುವಂತೆ ವಲಯ ನಿಯಮಾವಳಿಗಳಲ್ಲಿ ಕಡ್ಡಾಯವಾಗಿ ಅಳವಡಿಸಿಕೊಳ್ಳುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಕೆ.ಎಸ್.ಜಗದೀಶರೆಡ್ಡಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,

ಇವರಿಗೆ:

1) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ.
2) ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪರಿಸರ), ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ.
3) ಸರ್ಕಾರದ ಕಾರ್ಯದರ್ಶಿ, ಸಣ್ಣ ನೀರಾವರಿ ಇಲಾಖೆ, ವಿಕಾಸ ಸೌಧ.
4) ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.
5) ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.
6) ಅಧ್ಯಕ್ಷರು, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು.
7) ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು.
8) ನಿರ್ದೇಶಕರು, ನಗರ ಯೋಜನಾ ಇಲಾಖೆ, ಬೆಂಗಳೂರು.
9) ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು.
10) ಸಂಬಂಧಪಟ್ಟ ನಗರ ಯೋಜನಾ ಪ್ರಾಧಿಕಾರಗಳ ಸದಸ್ಯ ಕಾರ್ಯದರ್ಶಿಗಳು (ಬಿ.ಎಂ.ಆರ್.ಡಿ.ಎ. ಮುಖಾಂತರ).
11) ಸರ್ಕಾರದ ಉಪ ಕಾರ್ಯದರ್ಶಿ (ಸಚಿವ ಸಂಪುಟ), ವಿಧಾನ ಸೌಧ (ಪ್ರಕರಣ ಸಂಖ್ಯೆ : ಸಿ:389/2019, ದಿನಾಂಕ: 28.06.2019).
12) ಮಾನ್ಯ ಉಪ ಮುಖ್ಯಮಂತ್ರಿಯವರ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
13) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.
14) ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

## Annexure-I

| Zone | Area Covered | Nature of restricted/regulated activities |
|---|---|---|
| (1) | (2) | (3) |
| Zone-I | Entire Tippagondanahalli Reservoir (TGR) catchment area specified in Annexure-2. | a) Regulation and checking over exploitation of ground water.<br>b) No fresh leases or license for mining, quarrying and stone crushers shall be granted.<br>c) No person shall dispose solid as well as liquid waste in this area without scientific Processing.<br>d) To ensure adoption of rain water harvesting systems in all the new and existing buildings, within six months from the date of issue of this order.<br>e) To promote organic farming including bio-fertilizers and bio-pesticide. |
| Zone -2 | Area covered within 2 kms from the Tippagondana halli Reservoir (TGR) boundary | No person shall carry on activities other than Agricultural or Agriculture related activities without prior permission |
| Zone-3 | Area covered within 500 mtr distance from the river banks of Arkavathy (only upto Hesarghatta tank from TGR) and Kumudvathi | No person shall carry on activities other than Agriculture or Agriculture related activities without prior permission |
| Zone-4 | Area covered within 500 mtr to 01 Km distance from the river banks of Arkavathy (only upto Hesaraghatta Tank from TGR) and Kumudvathi (Excluding the areas falling within zone 2) | a) Permit only those industrial activities which are listed as Green category by the Karnataka State Pollution Control Board with mandatory adoption of rainwater harvesting systems and waste water treatment facilities. The other regulatory/civic agencies to issue permit only after Consent form Establishment (CFE) is obtained from the KSPCB.<br>b) Permit new residential buildings with mandatory adoption of Zero discharge sewage facilities and rainwater harvesting systems and reuse of this water for other than drinking purpose. |
| | | c) Permit Educational and Medical Institutions, Hospitals and Govt. Hostels with mandatory adoption of Zero discharge sewage facilities and rainwater harvesting systems and reuse of this water for other than drinking purpose. |

## ANNEXURE-2

## THE TIPPAGONDANAHALLI RESERVOIR CATCHMENTS LOCATION AND EXTENT:

The Tippagondanahalli Reservoir is situated about 34 Km. West of Bangalore City and is drained by the river Arkavati and the river Kumudvati. The catchment of the reservoir extends up to Dabaspet towards North-West of Bangalore City on the Bangalore-Tumkur National Highway (NH-4) and up to Nandi hills, about 60 Km north of Bangalore City. The Tippagondanahalli Reservoir catchment covers an area of 1453 sq.km. and is covered in the Survey of India toposheet No.57/G/3, G/4, G/7, G/8, G/11, G/12, H/5 and H/9. The area lies between $12^0$ 56' and $13^0$ 23' 15" North Latitudes and $77^0$ 30" and $77^0$ 41' 15" East Longitudes. The catchment occupies an area of 461.80 sq.km. (31.78% of the total catchment) of Doddaballapur Taluk; 396.91 sq.km. (27.32% of the catchment) of Nelamangala Taluk; 355.41 sq.km. (24.46% of the catchment) of Bangalore North; 132.32 sq.km. (9.11% of the catchment) of Magadi Taluk; 58.35 sq.km. (4.00% of the catchment) of Devanahalli Taluk; 40.26 sq.km. (2.77% of the catchment) of Bangalore South and 8.00 sq.km. (0.55% of the catchment) of Chikballapur Taluk.

** ** **

ಅನುಬಂಧ-೮



ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 126 ಸಮನ್ವಯ 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 11-08-2021.

## ಸುತ್ತೋಲೆ

ವಿಷಯ: ಕೆರೆ-ಕಟ್ಟೆ ಮೊದಲಾದ ಜಲಕಾಯಗಳಲ್ಲಿನ ಹಾಗೂ ನಿರ್ಬಂಧಿತ ಪ್ರದೇಶದಲ್ಲಿನ (Buffer Zone) ಅಕ್ರಮ ಕಟ್ಟಡ/ಸಂರಚನೆಗಳನ್ನು ತೆರವುಗೊಳಿಸುವ ಕುರಿತು ಸೂಚನೆಗಳು.

*****

ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಾದ ರಿಟ್ ಅರ್ಜಿ ಸಂಖ್ಯೆ: 38401/2014 ಪ್ರಕರಣದಲ್ಲಿ, ಮಾನ್ಯ ನ್ಯಾಯಾಲಯವು ನೀಡಿರುವ ದಿನಾಂಕ: 14-07-2021ರ ದೈನಂದಿನ ಆದೇಶ, ಭಾರತದ ಸಂವಿಧಾನದ ಅನುಚ್ಛೇದ 51 (A) (g), ಕರ್ನಾಟಕ ಕೆರೆ ಸಂರಕ್ಷಣೆ ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ ಕಲಂ 12 ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಧಿನಿಯಮ 2020, ಕರ್ನಾಟಕ ಪುರಸಭೆಗಳ ಅಧಿನಿಯಮ 1964 ಮತ್ತು ಕರ್ನಾಟಕ ಮಹಾನಗರ ಪಾಲಿಕೆಗಳ ಅಧಿನಿಯಮ 1976 ಗಳಲ್ಲಿ ಕೆರೆ-ಕಟ್ಟೆ ಮೊದಲಾದ ಜಲಕಾಯಗಳನ್ನು ಸಂರಕ್ಷಿಸುವ ಮತ್ತು ಅವುಗಳಲ್ಲಿನ ಅಕ್ರಮ ಕಟ್ಟಡ/ಸಂರಚನೆಗಳನ್ನು ತೆರವುಗೊಳಿಸುವ ಕುರಿತು ಈ ಕೆಳಕಂಡಂತೆ ಅವಕಾಶಗಳನ್ನು ಕಲ್ಪಿಸಲಾಗಿರುತ್ತದೆ.

1) ಭಾರತ ಸಂವಿಧಾನದ ಭಾಗ IVA ರ ಮೂಲಭೂತ ಕರ್ತವ್ಯಗಳ ಅನುಚ್ಛೇಧ 51-A(g) ರಲ್ಲಿ ಈ ಕೆಳಕಂಡಂತೆ ಕಡ್ಡಾಯಪಡಿಸಲಾಗಿದೆ.

51A. Fundamental duties,-It shall be the duty of every citizen of India-

(g) "to protect and improve the natural environment including forests, lakes, rivers and wild life, and to have compassion for living creatures,"

2) ಕರ್ನಾಟಕ ಪುರಸಭೆಗಳ ಅಧಿನಿಯಮ 1964ರ ಕಲಂ 81 ಮತ್ತು 87 ರಲ್ಲಿ ಈ ಕೆಳಕಂಡಂತೆ ಅವಕಾಶ ಕಲ್ಪಿಸಲಾಗಿರುತ್ತದೆ.

81. Municipal property. (1) Every municipal council may for the purpose of this Act, acquire and hold property both movable and immovable, whether within or without the limits of the 1 [municipal area]1. 1. Substituted by Act 36 of 1994 w.e.f. 1-6-1994.

(2) All property of the nature herein specified, and not being specially reserved by the Government, shall be vested in and belong to the municipal council and shall, together with all other property of whatsoever nature or kind not being specially reserved by the Government, which may become vested in the municipal council, be under its direction, management and control and shall be held and applied by it as trustee, subject to the provisions and for the purposes of this Act, that is to say,—

(a) xxx

(b) all public streams, tanks, reservoirs, cisterns, wells, springs, aqueducts, conduits, tunnels, pipes, pumps and other water works and all bridges, buildings,

..2.,

engines, works, materials and things connected therewith, or appertaining thereto, and also any adjacent land not being private property appertaining to any public tank or well;

(c) all public sewers and drains, and all sewers, drains, tunnels, culverts, gutters and water courses, in, alongside or under any street, and all works, materials and things appertaining thereto, as also all dust, dirt, dung, ashes, refuse, animal matter or filth or rubbish of any kind collected by the municipal council from the streets, houses, privies, sewers, cess-pools or elsewhere;

87. Obligatory functions of municipal councils.—It shall be incumbent on every municipal council to make adequate provision by any means or resources which it may lawfully use or take for each of the following matters within the 1 [municipal area]1 , namely:—1. Substituted by Act 36 of 1994 w.e.f. 1-6-1994.

(a) xxx

(b) xxx

(c) xxx

(d) xxx

(e) xxx

(f) removing obstructions and projections in public streets, bridges, and other public places, and in spaces not being private property, which are open to the enjoyment of the public, whether such spaces are vested in the municipal council or belong to the Government;

(g) xxx

(h) xxx

(i) constructing, altering and maintaining public streets, culverts, municipal boundary marks, markets 1 [(including separate and suitable place for vending vegetables)]1 , slaughter houses, latrines, privies, urinals, drains, sewers, drainage works, sewage works, baths, washing places, drinking fountains, tanks, wells, dams and the like;

3) ಕರ್ನಾಟಕ ಮಹಾನಗರ ಪಾಲಿಕೆಗಳ ಅಧಿನಿಯಮ 1976ರ ಕಲಂ 174ರಲ್ಲಿ ಈ ಕೆಳಕಂಡಂತೆ ಅವಕಾಶ ಕಲ್ಪಿಸಲಾಗಿರುತ್ತದೆ.

174. Corporation property.- (1) All property of the nature herein specified, and not being specially reserved by Government, shall be vested in and belong to the corporation and shall, together with all other property or whatsoever nature or kind not being specially reserved by Government, which may become vested in the corporation, be under its direction, management and control and shall be held and applied by it as trustee, subject to the provisions and for the purposes of this

Act, that is to say,-

(a) all public parks, playgrounds, and open spaces reserved for ventilation:

(b) all public lamps, lamp posts and apparatus connected therewith or appertaining thereto; 1977: KAR. ACT 14] Municipal Corporations

(c) all gates, markets, slaughter houses, manure and refuse depots and public buildings of every description.

(2) The corporation may accept trusts relating exclusively to the furtherance of purposes to which the corporation funds may be applied. 175. Acquisition of property and interest therein.- Subject to the provisions of

4) ಬಿಬಿಎಂಪಿಯ ಕಲಂ 129 (2) ಮತ್ತು 132 ರಲ್ಲಿ ಈ ಕೆಳಕಂಡಂತೆ ಅವಕಾಶ ಕಲ್ಪಿಸಲಾಗಿರುತ್ತದೆ.

129 (2) All properties specified under this section and not specifically owned and controlled by the Government under the section shall belong to the corporation and be subject to such direction, management and control of the corporation.

132 **Properties of the Government managed by the corporation.-**

1. The Government may transfer any land or property belonging to itself to the corporation for its management upon such terms and conditions that the Government may determine from time to time.
2. In the event that the Government is of the opinion that its properties are not being managed satisfactorily by the corporation or it has contravened such prescribed terms and conditions of management, the Government may transfer such properties to itself.

<u>ಅನುಸೂಚಿ-1ರ VII (f) :</u>

Maintenance of all public tanks and regulating the reexcavation, repair and up-keep of all tanks, wells and other sources of water-supply and provision for unfiltered water supply for non-domestic uses.

5) ಕರ್ನಾಟಕ ಕೆರೆ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ (KTCDA) ಕಾಯ್ದೆ-2014ರ ಕಲಂ 12ರ ಉದ್ಧೃತ ಭಾಗ ಈ ಕೆಳಗಿನಂತಿದೆ.

12. <u>Acts prohibited in tanks.-</u> Notwithstanding anything to the contrary contained in any law for the time being in force, no person or institution or organization (registered or unregistered) or company or firm or association, Government departments, corporation or any local or other authority and their agents or employees or any body on their behalf shall,-

i. use the tank for any purpose other than storage or impounding of water or for the purpose mentioned in clause (9) of section 5;

..4..

2. construct any structure on tank land, occupy any tank land or part there of or cause any obstruction at the natural or normal course of inflow or outflow of water into, or from, the tanks on the upstream and or downstream without permission of the Government;

3. make any irregular and unauthorized construction, any commercial, recreational or industrial complexes or houses or carry on any industrial activity within thirty meters from the outer boundary of the tank;

ಈ ಮೇಲ್ಕಾಣಿಸಿದ ಪ್ರಾವಿಧಾನಗಳ ಅನುಸಾರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ವ್ಯಾಪ್ತಿಯೂ ಸೇರಿದಂತೆ, ರಾಜ್ಯದ ಎಲ್ಲಾ ಮಹಾನಗರ ಪಾಲಿಕೆಗಳು / ನಗರ ಸಭೆಗಳು / ಪುರಸಭೆಗಳು / ಪಟ್ಟಣ ಪಂಚಾಯ್ತಿಗಳ ವ್ಯಾಪ್ತಿಯಲ್ಲಿ ಬರುವ, ಕೆರೆ-ಕಟ್ಟೆ ಮೊದಲಾದ ಜಲಕಾಯಗಳಲ್ಲಿ ಅಕ್ರಮವಾಗಿ ನಿರ್ಮಾಣ ಮಾಡಿರುವ ಕಟ್ಟಡ/ಸಂರಚನೆಗಳನ್ನು ತೆರವುಗೊಳಿಸಿ, ಜಲಕಾಯಗಳನ್ನು ಸಂರಕ್ಷಿಸಬೇಕಾಗಿರುತ್ತದೆ. ಮಾತ್ರವಲ್ಲದೇ, ಕೆರೆ-ಕಟ್ಟೆ ಜಲಕಾಯಗಳ ಅಂಚಿನಿಂದ 30 ಮೀಟರ್‌ವರೆಗಿನ ನಿರ್ಬಂಧಿತ ಪ್ರದೇಶದಲ್ಲಿ (Buffer Zone) ಸಹ ಯಾವುದೇ ಅಕ್ರಮ ಕಟ್ಟಡ/ಸಂರಚನೆಗಳನ್ನು ತೆರವುಗೊಳಿಸಬೇಕಾಗಿರುತ್ತದೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಅಧಿನಿಯಮ 2020ರ ಕಲಂ 129 (2) ಅನುಸೂಚಿ-1ರ VII (f) ಹಾಗೂ ಕಲಂ 132ರ ಅನುಸಾರ ಬಿಬಿಎಂಪಿ ವ್ಯಾಪ್ತಿಯೊಳಗೆ ಹಾಗೂ ಕರ್ನಾಟಕ ಪುರಸಭೆಗಳ ಅಧಿನಿಯಮ 1964ರ ಕಲಂ 81 ಮತ್ತು 87ರ ಅನುಸಾರ ನಗರಸಭೆ/ಪುರಸಭೆ/ಪಟ್ಟಣ ಪಂಚಾಯಿತಿಗಳ ವ್ಯಾಪ್ತಿಯೊಳಗೆ ಹಾಗೂ ಕರ್ನಾಟಕ ಮಹಾನಗರ ಪಾಲಿಕೆಗಳ ಅಧಿನಿಯಮ 1976ರ ಕಲಂ 174ರ ಸಾರ ರಾಜ್ಯದ ಎಲ್ಲಾ ಮಹಾನಗರ ಪಾಲಿಕೆಗಳ ವ್ಯಾಪ್ತಿಯೊಳಗೆ ಬರುವ ಎಲ್ಲ ಕೆರೆ-ಕಟ್ಟೆಗಳಲ್ಲಿ ನಿರ್ಮಾಣವಾಗಿರುವ ಅಕ್ರಮ ಕಟ್ಟಡ/ಸಂರಚನೆಗಳನ್ನು Karnataka Tank Conservation and Development Authority Act (KTCDA) 2014ರ ಕಲಂ 12 ರಂತೆ ಅಕ್ರಮ ಕಟ್ಟಡ/ಸಂರಚನೆಗಳನ್ನು ತೆರವುಗೊಳಿಸಿ, ಸುಸ್ಥಿತಿಯಲ್ಲಿ ಕಾಪಾಡುವಂತೆ ಈ ಮೂಲಕ ನಿರ್ದೇಶಿಸಿದೆ.

ಮುಂದುವರೆದು, Karnataka Tank Conservation and Development Authority Act 2014ರ ಕಲಂ 12(3)ರ ಅನುಸಾರ ಕೆರೆ-ಕಟ್ಟೆ ಜಲಕಾಯಗಳ ಅಂಚಿನಿಂದ 30 ಮೀಟರ್‌ವರೆಗಿನ ನಿರ್ಬಂಧಿತ ವಲಯದಲ್ಲಿ (Buffer Zone) ನಿರ್ಮಾಣವಾಗಿರುವ ಅಕ್ರಮ ಕಟ್ಟಡ/ಸಂರಚನೆಗಳನ್ನು ಸಹ ಕಟ್ಟುನಿಟ್ಟಾಗಿ ತೆರವುಗೊಳಿಸುವಂತೆ ನಿರ್ದೇಶಿಸಿದೆ.

ಕೆ.ಎ. ಹಿದಾಯತ್ತುಲ್ಲ 11/8/2021

(ಕೆ.ಎ. ಹಿದಾಯತ್ತುಲ್ಲ)

ಸರ್ಕಾರದ ಜಂಟಿ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ (ಸಮನ್ವಯ).

ಇವರಿಗೆ,

1) ಮುಖ್ಯ ಆಯುಕ್ತರು. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು.
2) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
3) ಅಧ್ಯಕ್ಷರು, ಬೆಂಗಳೂರು ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಕಾವೇರಿ ಭವನ, ಬೆಂಗಳೂರು.
4) ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.
5) ಮಹಾನಗರ ಆಯುಕ್ತರು, ಬಿ.ಎಂ.ಆರ್.ಡಿ.ಎ., ಬೆಂಗಳೂರು.
6) ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, ವಿವಿ ಗೋಪುರ, ಬೆಂಗಳೂರು.
7) ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ, ಬೆಂಗಳೂರು.

8) ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳು.
9) ಆಯುಕ್ತರು, ರಾಜ್ಯದ ಎಲ್ಲಾ ಮಹಾನಗರ ಪಾಲಿಕೆಗಳು.
10) ಆಯುಕ್ತರು, ರಾಜ್ಯದ ಎಲ್ಲಾ ನಗರಾಭಿವೃದ್ಧಿ ಪ್ರಾಧಿಕಾರಗಳು.
11) ಆಯುಕ್ತರು / ಪೌರಾಯುಕ್ತರು, ರಾಜ್ಯದ ಎಲ್ಲಾ ನಗರ ಸಭೆಗಳು / ಪುರಸಭೆಗಳು.
12) ಸದಸ್ಯ ಕಾರ್ಯದರ್ಶಿಗಳು, ರಾಜ್ಯದ ಎಲ್ಲಾ ನಗರ ಯೋಜನಾ ಪ್ರಾಧಿಕಾರಗಳು.
13) ಮುಖ್ಯಾಧಿಕಾರಿಗಳು, ರಾಜ್ಯದ ಎಲ್ಲಾ ಪಟ್ಟಣ ಪಂಚಾಯಿತಿಗಳು.
14) ಸಂಕಲನಕಾರರು, ಸರ್ಕಾರಿ ಕೇಂದ್ರ ಮುದ್ರಣಾಲಯ, ವಿಕಾಸಸೌಧ, ಬೆಂಗಳೂರು.

ಪ್ರತಿ ಮಾಹಿತಿಗಾಗಿ:

1) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.
2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
3) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಬೆಂಗಳೂರು.
4) ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ (ಪೌರಾಡಳಿತ ಮತ್ತು ನಗರಾಭಿವೃದ್ಧಿ ಪ್ರಾಧಿಕಾರ), ವಿಕಾಸಸೌಧ, ಬೆಂಗಳೂರು.
5) ಸರ್ಕಾರದ ಕಾರ್ಯದರ್ಶಿ, ಸಣ್ಣ ನೀರಾವರಿ ಇಲಾಖೆ, ವಿಕಾಸಸೌಧ, ಬೆಂಗಳೂರು.
6) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ಕೆರೆ ಸಂರಕ್ಷಣೆ ಅಭಿವೃದ್ಧಿ ಪ್ರಾಧಿಕಾರ, ಬೀಜ ಭವನ, ಹೆಬ್ಬಾಳ, ಬೆಂಗಳೂರು.